ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ರಾಜ್ಯದಲ್ಲಿ ಅಂಗವಿಕಲರ / ವಿಕಲಚೇತನ ಮಕ್ಕಳನ್ನು ಗುರುತಿಸುವುದು

ಶ್ರೀ ಆರ್. ಪ್ರಸನ್ನ ಕುಮಾರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

877 (966) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ರಾಜ್ಯದಲ್ಲಿ ಅಂಗವಿಕಲ/ವಿಕಲಚೇತನ ಹೊಂದಿರುವ ಮಕ್ಕಳನ್ನು ಗುರುತಿಸುವ ಕಾರ್ಯ ಕೈಗೊಳ್ಳಲಾಗಿದೆಯೇ ; ಹಾಗಿದ್ದಲ್ಲಿ, ಎಷ್ಟು ಮಕ್ಕಳನ್ನು ಗುರುತಿಸಲಾಗಿದೆ ; (ಮಾಹಿತಿ ನೀಡುವುದು)

(ಆ) ಅಂಗವಿಕಲ/ವಿಕಲಚೇತನ ಹೊಂದಿರುವ ಮಕ್ಕಳನ್ನು ಮುಖ್ಯವಾಹಿನಿಗೆ ತಂದು ಶಿಕ್ಷಣ ನೀಡಲು ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು ;

(ಇ) ಅಂತಹ ಮಕ್ಕಳನ್ನು ಶಾಲೆಗೆ ದಾಖಲು ಮಾಡಿದ್ದಲ್ಲಿ, ಅವರುಗಳಿಗೆ ಪ್ರಸ್ತುತ ನೀಡಲಾಗುತ್ತಿರುವ ಸೌಲಭ್ಯಗಳೇನು ;

(ಈ) ಪ್ರಸ್ತುತ ಸಾಲಿಗೆ ಅನುದಾನ ಬಿಡುಗಡೆಯಾಗಿದೆಯೇ ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಉ) ಅಂಗವಿಕಲ/ವಿಕಲಚೇತನ ಹೊಂದಿರುವ ಮಕ್ಕಳಿಗೆ ಸರ್ಕಾರದಿಂದ ನೀಡಲಾಗುತ್ತಿರುವ ಸೌಲಭ್ಯಗಳು ಯಾವುವು ; ಇವುಗಳನ್ನು ಮಕ್ಕಳಿಗೆ ತಲುಪಿಸಲು ಸರ್ಕಾರ ಯಾವ ರೀತಿಯ ಯೋಜನೆಗಳನ್ನು ಹಮ್ಮಿಕೊಂಡಿದೆ ;

(ಊ) ಅಂಗನವಾಡಿ ಕೇಂದ್ರಗಳಲ್ಲಿ ಮಕ್ಕಳಿಗೆ ಪ್ರತಿನಿತ್ಯದ ಆಹಾರವನ್ನು ಒದಗಿಸಲು ಬೇಕಾಗುವ ಆಹಾರ ಸಾಮಗ್ರಿಗಳನ್ನು ಆಯಾ ತಾಲ್ಲೂಕುಗಳಿಂದಲೇ ಕೊಳ್ಳುವ ಅವಕಾಶವನ್ನು ಈ ಹಿಂದೆ ನೀಡಿರುವುದು ನಿಜವೇ ;

(ಋ) ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳ ಒಟ್ಟು ಸಂಖ್ಯೆ ಎಷ್ಟು; ಪ್ರಸ್ತುತ ಸದರಿ ವ್ಯವಸ್ಥೆಯನ್ನು ಬದಲಿಸಿ ಕೇಂದ್ರೀಕೃತ ವ್ಯವಸ್ಥೆ ಮಾಡಿರುವುದು ನಿಜವೇ ; ಈ ರೀತಿ ಬದಲಾವಣೆ ಮಾಡಲು ಕಾರಣವೇನು ? (ವಿವರ ನೀಡುವುದು)